CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೨೮, ೨೦೦೫ (ಶ್ರಾವಣ ೬, ಶಕ ವರ್ಷ ೧೯೨೭) | ಸಂಚಿಕೆ ೩೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು**
**ದ.ಕ. ಜಿಲ್ಲೆ, ಬೆಂದೂರ್‌ವೆಲ್‌ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯುಸಿಎ:ಸಿಆರ್-24/2005, ದಿನಾಂಕ: 30ನೇ ಜೂನ್ 2005**

**ಅರ್ಜಿದಾರರು:**
1. ಶ್ರೀಮತಿ ಪುಷ್ಪ
2. ಕುಮಾರಿ ಮಮತ
3. ಮಾಸ್ಟರ್ ಕಾರ್ತಿಕ್,
   ಪದಮಿತ್ತು ಮನೆ, ಕುಲಶೇಖರ,
   ಮಂಗಳೂರು

**ವಿರುದ್ಧ**

**ಪ್ರತಿವಾದಿಗಳು:**
ಶ್ರೀ ಗಣೇಶ್ ಬಿನ್ ಕೃಷ್ಣಪ್ಪ
ಕಟ್ಟಡ ಗುತ್ತಿಗೆದಾರರು ಪದಂಗಡಿ ಮುಗ್ರೋಡಿ,
ತಗ್ಗುಮನೆ ಕೊಂಚಾಡಿ ಅಂಚೆ, ಪದವು ಗ್ರಾಮ
ಮಂಗಳೂರು

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಪುಷ್ಪ ಇವರ ಗಂಡನಾದ ದೇಜಪ್ಪ ಇವರು ಪ್ರತಿವಾದಿ ಶ್ರೀ ಗಣೇಶ್ S/o. ಕೃಷ್ಣಪ್ಪ ಗುತ್ತಿಗೆದಾರರು ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 5.3.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪವಿಭಾಗ-1, ಮಂಗಳೂರು.

ಪಿ.ಆರ್. 966

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ**
**ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ/121/2005-06, ದಿನಾಂಕ: 27ನೇ ಜೂನ್ 2005**

**ಅರ್ಜಿದಾರರು:**
1) ಸಿದ್ದವ್ವಾ ಗಂಡ ಯಮನಪ್ಪಾ ಹುನಗುಂದ
   ವಾಸ: ಮದಿನಾಳ ತಾ: ಮುದ್ದೇಬಿಹಾಳ,
   ಜಿಲ್ಲಾ: ಬಿಜಾಪೂರ

**ವಿರುದ್ಧ**

**ಪ್ರತಿವಾದಿಗಳು:**
1) ದಿ ಮ್ಯಾನೇಜಿಂಗ್ ಡೈರೆಕ್ಟರ್
   ರಾಜೇಶ್ ರೋಡ್ ಲೈನ್ಸ್ ಪ್ರೈವೇಟ್ ಲಿಮಿಟೆಡ್
   ಪೊಂಡಾ, ಗೋವಾ

**ಪ್ರಕಟಣೆ**

ಶ್ರೀ:ಶ್ರೀಮತಿ ಸಿದ್ದವ್ವಾ ಗಂಡ ಯಮನಪ್ಪಾ ಹುನಗುಂದ ಇವರುಗಳಾದ ತಾವು ಮೃತ ಮುತ್ತಪ್ಪ @ ಮುಸ್ತಾಫಾ @ ದ್ಯಾಮಪ್ಪ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮುತ್ತಪ್ಪ @ ಮುಸ್ತಾಫಾ @ ದ್ಯಾಮಪ್ಪ ಇವರು ಒಂದನೇ ಪ್ರತಿವಾದಿಗಳಾದ ದಿ ಮ್ಯಾನೇಜಿಂಗ್ ಡೈರೆಕ್ಟರ್ ರಾಜೇಶ್ ರೋಡ್ ಲೈನ್ಸ್ ಪ್ರೈವೇಟ್ ಲಿಮಿಟೆಡ್, ಪೊಂಡಾ, ಗೋವಾ ಇವರ ಟ್ರಕ್ ನಂ. GA-01/W-5593 ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪಾ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 967

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/72/2004-05/475, ದಿನಾಂಕ: 29ನೇ ಜೂನ್ 2005**

**ವಿಷಯ:** ಸಮಾಪನಾ ಆದೇಶಿತ ಭದ್ರಾ ಜಲ ವಿದ್ಯುತ್ ಯೋಜನೆ (ಬಿಹೆಚ್‌ಇಪಿ) ಸಹಕಾರ ಸಂಘ ನಿ., ಬಿ.ಆರ್.ಪಿ. ಭದ್ರಾವತಿ ತಾ: ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/72/2004-05, ದಿನಾಂಕ: 7.10.2004.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ. ಎಆರ್ 24/ಸಮಾಪನೆ/ರದ್ಧತಿ/ಸಿಆರ್-489/2005-06, ದಿನಾಂಕ: 14.6.2005.

ಭದ್ರಾ ಜಲ ವಿದ್ಯುತ್ ಯೋಜನೆ ಸಹಕಾರ ಸಂಘ ನಿ., (ಬಿಹೆಚ್‌ಇಪಿ) ಬಿ.ಆರ್.ಪಿ. ಭದ್ರಾವತಿ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೋಂದಣಿ ನಂ. ಎಆರ್‌ಎಸ್/1260/1960 ದಿನಾಂಕ: 3.11.1960 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1) ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಶ್ರೀ ಮಧುಕರ ರಾವ್ ಕರಣಂ ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 3.11.2004 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 14.5.2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಲೆಕ್ಕ ಪತ್ರಗಳು ಕಳೆದ ಹತ್ತು ವರ್ಷಗಳಿಂದ ಆಡಿಟ್ ಆಗಿರುವುದಿಲ್ಲ ಎಂದು ವರದಿ ಮಾಡಿ ಈ ಅವಧಿಯ ವ್ಯವಹಾರಕ್ಕೆ ಆಗಿನ ಆಡಳಿತ ಮಂಡಳಿಯವರು ಜವಾಬ್ದಾರರೆಂದು ನಿರ್ಣಯಿಸಿರುತ್ತಾರೆ. ಈ ಸಂಘದವರು ಮಹಾಸಭೆ ನಡೆಸಿ ನೋಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಸಮಾಪನಾಧಿಕಾರಿಯವರು ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಿ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಣೆಗೊಳಿಸಿ ರದ್ದತಿಗೆ ಆಕ್ಷೇಪಣೆ ಕೇಳಿದ್ದು, ಸದಸ್ಯರಿಂದಾಗಲೀ, ಸಾರ್ವಜನಿಕರಿಂದಾಗಲೀ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸಿದ್ದು, ಈ ಸಂಘದಲ್ಲಿ ಸದಸ್ಯತ್ವ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2) ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್‌ಎಂ/2000, ದಿನಾಂಕ: 21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಭದ್ರಾ ಜಲ ವಿದ್ಯುತ್ ಯೋಜನೆ ಸಹಕಾರ ಸಂಘ ನಿ (ಬಿಹೆಚ್‌ಇಪಿ) ಬಿ.ಆರ್. ಪ್ರಾಜೆಕ್ಟ್ ಭದ್ರಾವತಿ ತಾಲ್ಲೂಕು ಇದರ ನೋಂದಣಿ ನಂ. ಎಆರ್‌ಎಸ್/1260/1960 ದಿನಾಂಕ: 3.11.1960 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 29ನೇ ಜೂನ್ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 968

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿ. 441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನಡವಳಿಕೆಗಳು

**ಸಿ.ಇ.ಪಿ. ಸಂಖ್ಯೆ: ಎ.ಆರ್.ಇ/ಯು.ಬಿ.ಎಫ್/394/05-06, ದಿನಾಂಕ: 5ನೇ ಮೇ 2005**

**ವಿಷಯ:** ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿಯಮಿತ ಟಿ. ನರಸೀಪುರ ಶಾಖೆ, ಟಿ. ನರಸೀಪುರ ಇದರ ಅಮಲ್ಜಾರಿ ಸಂಖ್ಯೆ: ಸ.ಸ. ಗೌ ಮ ಮೈ/ 1939/98-99 ಸಿ.ಇ.ಬಿ. ನಂ. ಎಆರ್‌ಬಿ 11(45) 2483/2000-01 ದಿನಾಂಕ: 30.10.2001 ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ನಿಯಮ 38(6)(ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ: ಸ.ಸ. ಗೌ ಮ ಮೈ / 1939/98-99.
2) ಅಮಲ್ಜಾರಿ ಸಂಖ್ಯೆ: ಎ ಆರ್ ಬಿ 11 (45) ಇ.ಪಿ. ನಂ. 2483/2000-01.
3) ಮಾರಾಟಾಧಿಕಾರಿಯವರ ವರದಿ ದಿನಾಂಕ: 18.3.2005.

**ಪ್ರಸ್ತಾವನೆ:**

ಶ್ರೀ ಜಿ.ಆರ್. ನರಸಿಂಹಯ್ಯ ಬಿನ್ ರಂಗಪ್ಪ ನಂ. 593, ಶ್ರೀರಾಮ ಬೀದಿ, ಟಿ. ನರಸೀಪುರ ಇವರು ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿಯಮಿತ, ಟಿ. ನರಸೀಪುರ ಶಾಖೆ, ಟಿ. ನರಸೀಪುರ ಈ ಬ್ಯಾಂಕಿನಲ್ಲಿ ಸದಸ್ಯತ್ವ ಸಂಖ್ಯೆ ನಂ. 0022 ದಿನಾಂಕ: 18.11.1995 ರಂದು ರೂ. 25,000 (ಇಪ್ಪತ್ತೈದು ಸಾವಿರಗಳು ಮಾತ್ರ) ಗಳನ್ನು ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರನ್ವಯ ಮೈಸೂರು ಜಿಲ್ಲಾ ಸಹಕಾರ ಸಂಘಗಳ ಗೌರವ ಮಧ್ಯಸ್ಥರ ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: ಸ.ಸ. ಗೌ.ಮ.ಮೈ 1939/ 98-99 ಸಿ.ಇ.ಪಿ. ಸಂಖ್ಯೆ: ಎ ಆರ್ ಬಿ 11(45) 2483/ 2000-01 ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಗೌರವ ಮಧ್ಯಸ್ಥರು ಮೈಸೂರು ಜಿಲ್ಲೆ ಇವರ ನ್ಯಾಯಾಲಯದಿಂದ ಡಿಕ್ರಿ ಆದೇಶಾನುಸಾರ ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕಿನ ಕಾರ್ಯದರ್ಶಿಗಳು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 34(1)ರ ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 2ನೇ ವಲಯ, ಈ ಕಛೇರಿಯಲ್ಲಿ ಅಮಲ್ಜಾರಿ ಅರ್ಜಿ ಸಂಖ್ಯೆ: ಸ.ಸ.ಗೌ ಮ ಮೈ/ 1939/98-99 ಸಿ.ಇ.ಪಿ. ನಂ. ಎಆರ್‌ಬಿ 11(45)2483/2000-01 ದಿನಾಂಕ: 30.10.2001 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಅಮಲ್ಜಾರಿ ಕ್ರಮ ಕೈಗೊಂಡ ನಂತರ ಅಂತಿಮವಾಗಿ ಸಾಲಕ್ಕೆ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ: 17.3.2005 ರಂದು ಮಾರಾಟಾಧಿಕಾರಿಯವರಿಂದ ಸಾರ್ವಜನಿಕ ಹರಾಜಿಗೆ ತರಲಾಗಿತ್ತು. ಸದರಿ ದಿನ ನಡೆಸಿದ ಹರಾಜಿನಲ್ಲಿ 4 ಜನ ಬಿಡ್ಡುದಾರರು ಭಾಗವಹಿಸಿದ್ದು ಈ ಪೈಕಿ ಶ್ರೀ ಕೆ.ಎಸ್. ನಾಗರಾಜ ಮೂರ್ತಿ ಬಿನ್ ಕೆ.ಬಿ. ಶಿವರುದ್ರಪ್ಪ ಕುರುಬೂರು ಮೂಗೂರು ಹೋಬಳಿ ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಇವರು ರೂ. 38,600 (ರೂಪಾಯಿ ಮೂವತ್ತೆಂಟು ಸಾವಿರ ಆರುನೂರು ಮಾತ್ರ) ಗಳಿಗೆ ಬಿಡ್ಡು ಮಾಡಿದ್ದು ಅತೀ ಹೆಚ್ಚಿನ ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿಯನ್ನು ಅಸಲು ರೂ. 13,000/- ಬಡ್ಡಿ ಮತ್ತು ಇತರೆ ವೆಚ್ಚ ಸೇರಿ ಒಟ್ಟು ರೂ. 48,098/- ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ. 38,600 ರೂ.ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಕೆ.ಎಸ್. ನಾಗರಾಜ ಮೂರ್ತಿ ಬಿಡ್ಡಿನ ಮೊತ್ತ ಶೇಕಡಾ 15 ರೂ. 5,790 ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಮೊತ್ತ ದಿನಾಂಕ: 18.3.2005 ರಂದು ರೂ. 32,810 ಗಳನ್ನು ಪಾವತಿ ಮಾಡಿರುತ್ತಾರೆ.

ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ: 17.3.2005 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿ ಶ್ರೀ ಜಿ.ಆರ್. ನರಸಿಂಹಯ್ಯ ಬಿನ್ ರಂಗಪ್ಪ ರವರ ಸ್ಥಿರಾಸ್ತಿಯನ್ನು ಶ್ರೀ ಕೆ.ಎಸ್. ನಾಗರಾಜಮೂರ್ತಿ ಬಿನ್ ಕೆ.ಬಿ. ಶಿವರುದ್ರಪ್ಪ ಇವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ: 17.3.2005 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 4 (ನಾಲ್ಕು) ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಕೆ.ಎಸ್. ನಾಗರಾಜ ಮೂರ್ತಿ ಬಿನ್ ಕೆ.ಬಿ. ಶಿವರುದ್ರಪ್ಪ ಇವರಿಗೆ ರೂ. 38,600 ರೂ.ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ: 17.3.2005 ರಂದು ನಡೆದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

### ಆದೇಶ

ಎಸ್.ಎಸ್. ಕಟಗೇರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38 (6) (ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: ಸ.ಸ. ಗೌ ಮ ಮೈ 1939/98-99 ಸಿ. ಇ. ಪಿ. ಸಂಖ್ಯೆ: ಎ ಆರ್ ಬಿ 11 (45) 2483 / 2000-01 ಶ್ರೀ ಜಿ.ಆರ್. ನರಸಿಂಹಯ್ಯ ಬಿನ್ ರಂಗಪ್ಪ ಸದಸ್ಯತ್ವ ಸಂಖ್ಯೆ: 0022 ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 17.3.2005 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಕೆ.ಎಸ್. ನಾಗರಾಜ ಮೂರ್ತಿ ಬಿನ್ ಕೆ.ಬಿ. ಶಿವರುದ್ರಪ್ಪ ಕುರುಬೂರು, ಮೂಗೂರು ಹೋಬಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ. 38,600 ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು, ಬೈರಾಪುರ ಗ್ರಾಮದ ಸೈಟ್ ನಂ. 6, ಕ್ಷೇತ್ರ ಅಳತೆ 40 x 25 (1000) ಅಡಿ ಚದುರ ಅಡಿಯಿರುವ ನಿವೇಶನದ ಜಮೀನು.

ಮಾರಾಟದ ಮೊಬಲಗು: ರೂ. 38,600, ಮಾರಾಟ ಮಾಡಿದ ದಿನಾಂಕ: 17.3.2005.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 5ನೇ ಮೇ 2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441)
ಹಾಗೂ ವಸೂಲಾಧಿಕಾರಿಗಳು
ಕರ್ನಾಟಕ ರಾಜ್ಯ ಸಹಕಾರ ಪಟ್ಟಣ
ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441) ಹಾಗೂ ವಸೂಲಾಧಿಕಾರಿಗಳ ಕಛೇರಿ,**
**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು-560 027**
**ನಮೂನಾ ಕ್ರಮಾಂಕ: 10**

1959ನೇ ಇಸವಿಯ ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆಯನ್ವಯ ರಚಿತವಾದ ನಿಯಮಾವಳಿಗಳ ಪೈಕಿ ನಿಯಮ 38 ಉಪನಿಯಮ 7 ರ ಪ್ರಕಾರ ಕೊಟ್ಟ ಡಿಕ್ರಿ ಪ್ರಮಾಣ ಪತ್ರ.

**ಅಮಲ್ಜಾರಿ ಪ್ರಕರಣ ಸಂಖ್ಯೆ:** ಸ.ಸ.ಗೌ.ಮ.ಮೈ/1939/98-99, ದಿನಾಂಕ: 10.8.1999, ಸಿ.ಇ.ಪಿ ಸಂಖ್ಯೆ: ಎ ಆರ್ ಬಿ 11(45) 2483/2000-2001, ರೂ. 13,000 + ಬಡ್ಡಿ

**ಸ್ಟಾಂಪ್ ವಿವರ:** ರಸೀದಿ ಸಂಖ್ಯೆ: ಟಿ.6, ದಿನಾಂಕ: 30.10.2001, ರೂ. 930/- ಡಿ.ಸಿ.ಸಿ. ಬ್ಯಾಂಕ್ ಟಿ. ನರಸೀಪುರ ಶಾಖೆ

**ಡಿಕ್ರಿದಾರರು:** ಕಾರ್ಯದರ್ಶಿ ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿಯಮಿತ ಟಿ. ನರಸೀಪುರ ಶಾಖೆ, ಟಿ. ನರಸೀಪುರ.

**ವಿರುದ್ಧ**

**ತೀರ್ಪು ಬಾಕಿದಾರರು:** ಶ್ರೀ ಜಿ.ಆರ್. ನರಸಿಂಹಯ್ಯ ಬಿನ್ ರಂಗಪ್ಪ ನಂ. 593, ಶ್ರೀರಾಮ ಬೀದಿ, ಟಿ. ನರಸೀಪುರ, ಮೈಸೂರು ಜಿಲ್ಲೆ.

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ, ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು, ಜಿ.ಆರ್. ನರಸಿಂಹಯ್ಯ ಬಿನ್ ರಂಗಪ್ಪ ಇವರಿಂದ ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿಯಮಿತ, ಟಿ. ನರಸೀಪುರ ಶಾಖೆ, ಟಿ. ನರಸೀಪುರ ಇದಕ್ಕೆ ಸಂದಾಯವಾಗತಕ್ಕ ಬಾಕಿ ರೂ. 13,000 + ಬಡ್ಡಿ + ಇತರೆ ವೆಚ್ಚ ಸಲುವಾಗಿ ಈ ಕಾರ್ಯಾಲಯದಲ್ಲಿ ದಾಖಲು ಪಡಿಸಿದ ಪಂಚರ ಠರಾವು ಕ್ರಮಾಂಕ ಸ.ಸ.ಗೌ.ಮ.ಮೈ 1939/ 98-99 ದಿನಾಂಕ: 10.8.99, ಸಿ.ಇ.ಪಿ. ನಂ. ಎ ಆರ್ ಬಿ 11(45) 2483/2000-01ನೇದ್ದರ ಅಮಲಬಜಾವಣೆಯಲ್ಲಿ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ಮಾರಾಟಾಧಿಕಾರಿಯವರಾದ ಶ್ರೀ ಜಿ. ಶಿವಕುಮಾರ್, ಹಿರಿಯ ಸಹಾಯಕರು, ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿಯಮಿತ, ಕೇಂದ್ರ ಕಛೇರಿ, ಬೆಂಗಳೂರು ಇವರು ನಡೆಸಿದ ಜಾಹೀರ ಲಿಲಾವಿನಲ್ಲಿ ಶ್ರೀ ಕೆ.ಎಸ್. ನಾಗರಾಜ ಮೂರ್ತಿ ಬಿನ್ ಕೆ.ಬಿ. ಶಿವರುದ್ರಪ್ಪ ಕುರುಬೂರು, ಮೂಗೂರು ಹೋಬಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಇವರು ಖರೀದಿಸಿ ರಕಂ ರೂ. 38,600 ಪಾವತಿ ಮಾಡಿರುತ್ತಾರೆ ಮತ್ತು ಸದರಿ ಡಿಕ್ರಿ ನನ್ನಿಂದ ದಿನಾಂಕ: 5.5.2005 ರಂದು ಖಾಯಂ ಮಾಡಲ್ಪಟ್ಟಿತು.

**ಸ್ಥಿರಾಸ್ತಿಯ ಅನುಬಂಧ**

| | |
|---|---|
| ನೋಂದಣಿ ಜಿಲ್ಲೆ | ಮೈಸೂರು |
| ತಾಲ್ಲೂಕು | ಟಿ. ನರಸೀಪುರ |
| ಗ್ರಾಮ | ಬೈರಾಪುರ |
| ಸೈಟ್ ನಂ. | 6 (ಆರು) |

**ಸ್ಥಿರಾಸ್ತಿಗಳ ವರ್ಣನೆ**

| | |
|---|---|
| ಪೂರ್ವಕ್ಕೆ | ರಸ್ತೆ |
| ಪಶ್ಚಿಮಕ್ಕೆ | ಸೈಟ್ ನಂ. 7 |
| ಉತ್ತರಕ್ಕೆ | ರಸ್ತೆ ಹಾಗೂ ರೈಸ್ ಮಿಲ್ ಕಾಂಪೌಂಡ್ |
| ದಕ್ಷಿಣಕ್ಕೆ | ಸಿ.ಎಸ್. ರಾಜಶೇಖರಪ್ಪನವರ ಮನೆ |

ವಿಕ್ರಿ ಕಿಮ್ಮತ್ತು ರೂ. 38,600 (ರೂಪಾಯಿ ಮೂವತ್ತೆಂಟು ಸಾವಿರದ ಆರುನೂರು ಮಾತ್ರ) ಮಾರಾಟ ದಿನಾಂಕ; 17.3.2005.

ನನ್ನ ಸಹಿ ಹಾಗೂ ಮೊಹರನಿಶಿಯೊಂದಿಗೆ ಇಂದು ದಿನಾಂಕ: 5.5.2005 ಕೊಟ್ಟಿತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441)
ಹಾಗೂ ವಸೂಲಾಧಿಕಾರಿಗಳು
ಕರ್ನಾಟಕ ರಾಜ್ಯ ಸಹಕಾರ ಪಟ್ಟಣ
ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು-560 027

ಪಿ.ಆರ್. 969

**PROCEEDINGS OF THE REGISTERING AUTHORITY AND REGIONAL TRANSPORT OFFICER INDIRANAGAR, BANGALORE (EAST), BANGALORE-38**

**Present:** Afzal Ahamed Khan,
Regional Transport Officer & Registering Authority, Indiranagar, Bangalore (East)

**Sub:** Cancellation of registration certificate in respect of M.V. No. CAK-1778 (LGV)

**Ref:** Application dated 27.5.2005.

**PREAMBLE:**

The Light Goods vehicle Registration No. CAK-1778 stands in the Name of Sri A.G. Anath Krishna s/o. Govindaiah, No. 735, Aravindnagar, Yadav Layout St. Thomas Town, Bangalore-84. The r/o in his letter dated 27.5.2005 stated that, the vehicle is in question is not road worthy condition and beyond repairable. Under the circumstances he his not interested to the operate the vehicle on the public road and requested to cancel the registration certificate.

In view of the above facts I pass the following:-

**ORDER**

**No. RTO.BNG.E.RGN/TR.PR/CAK-1778/05-06, dated 29th June 2005**

In exercise of the powers vested under Sec. 55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of No. CAK-1778 wef 27.5.2005 as requested by the registered owner without prejudice and subject to recover the arrears of tax or penalty due if any found later on.

The brief description of the M.V. is as follows:

| | | |
|---|---|---|
| 1 | M.V. No. | CAK-1778 |
| 2 | Class of Vehicle | LGV |
| 3 | Type of Body | OPEN |
| 4 | Chassis No. | 3FD268949 |
| 5 | Engine No. | D-269143 |
| 6 | Year of Manufacture | 1986 |

**Afzal Ahmed Khan**
Regional Transport Officer &
Registering Authority, Indiranagar, Bangalore (East)

PR-970

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಬೀದರ್**

**ಪ್ರಕಟಣೆ**

**ಸಂ. ಬಿಸಿಎಂ/ಕಾಪತಭ/ಸಿಆರ್-15/2005-06, ದಿನಾಂಕ: 1ನೇ ಜುಲೈ 2005**

2005-06ನೇ ಸಾಲಿನ ಬೀದರ್ ಜಿಲ್ಲೆಯಲ್ಲಿ ಕಾನೂನು ಪದವಿ ಪಡೆದಿರುವ 2 ಹಿಂದುಳಿದ ವರ್ಗಗಳಿಗೆ ಹಾಗೂ 2 ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಸರ್ಕಾರಿ ವಕೀಲ ಅಥವಾ 20 ವರ್ಷಗಳಿಗಿಂತ ಹೆಚ್ಚಿನ ಅನುಭವ ಉಳ್ಳ ವಕೀಲರಿಂದ ತರಬೇತಿ ಕೊಡಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಯ ಅವಧಿಯು 4 ವರ್ಷಗಳಿದ್ದು ತರಬೇತಿ ಅವಧಿಯಲ್ಲಿ ಮಾಸಿಕ ರೂ. 1000-00 ತರಬೇತಿ ಭತ್ಯೆ ನೀಡಲಾಗುವುದು. ಅರ್ಜಿಗಳನ್ನು ಸಲ್ಲಿಸಬಯಸುವವರು ಈ ಕೆಳಕಂಡ ಷರತ್ತುಗಳನ್ನು ಪೂರೈಸಿರಬೇಕು.

1. ಅಭ್ಯರ್ಥಿಯು ಹಿಂದುಳಿದ ವರ್ಗಗಳಾದ ಪ್ರವರ್ಗ-1, 2ಎ, 3ಎ, 3ಬಿ ಹಾಗೂ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಹಾಗೂ ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದ್ದು ಬೀದರ್ ಜಿಲ್ಲೆಯ ನಿವಾಸಿಯಾಗಿರಬೇಕು.
2. ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ. 15000-00 ಕ್ಕೆ ಮೀರಿರಬಾರದು. ಪ್ರವರ್ಗ-1 ರಡಿಯಲ್ಲಿ ಬರುವ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.
3. ಅಭ್ಯರ್ಥಿಯು ಬಾರ್ ಕೌನ್ಸಿಲ್ ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.
4. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳಿಗೆ ಮೀರಿರಬಾರದು ಮತ್ತು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷಗಳ ಅವಧಿಯೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ಕಾರಣ ಅರ್ಹ ಅಭ್ಯರ್ಥಿಗಳು ಅರ್ಜಿ ನಮೂನೆಗಳನ್ನು ಕೆಳಗೆ ಸಹಿ ಮಾಡಿರುವವರ ಕಛೇರಿಯಿಂದ ಪಡೆದು ಕೆಳಕಂಡ ದಾಖಲೆಗಳೊಂದಿಗೆ ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಇಲಾಖೆ ಬಸವನಗರ ಬೀದರ್ ಇವರಿಗೆ ಈ ಪ್ರಕಟಣೆಯು ಗೆಜೆಟ್‌ನಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗೆ ತಲುಪುವಂತೆ ಸಲ್ಲಿಸುವುದು.

1. ಕಾನೂನು ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ದೃಢೀಕೃತ ಅಂಕಪಟ್ಟಿ
2. ಸಂಬಂಧಪಟ್ಟ ತಹಶೀಲ್ದಾರರಿಂದ ನೀಡಲ್ಪಟ್ಟ ಜಾತಿ ಆದಾಯ ಪ್ರಮಾಣ ಪತ್ರ.
3. ವಾಸಸ್ಥಳ ಪ್ರಮಾಣ ಪತ್ರ
4. ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿದ ಪ್ರಮಾಣ ಪತ್ರ

ಅಪೂರ್ಣವಾದ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಹೆಚ್ಚಿನ ಮಾಹಿತಿಗಾಗಿ ಕೆಳಕಂಡವರನ್ನು ಕಛೇರಿ ಸಮಯದಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಅಧಿಕಾರಿಗಳು, ಬೀದರ್.

ಪಿ.ಆರ್. 971

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್: 135/04-05, ದಿನಾಂಕ: 31ನೇ ಮೇ 2005**

**ವಿಷಯ:** ವಿಜಯ ವಿಠಲ ಚಾರಿಟೆಬಲ್ ಮತ್ತು ಎಜ್ಯುಕೇಷನಲ್ ಟ್ರಸ್ಟ್ (ರಿ) ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 33/1 ರಲ್ಲಿ 1-02, 32 ರಲ್ಲಿ 1-00 ಹಾಗೂ ಚಿಕ್ಕಗುಬ್ಬಿ ಗ್ರಾಮದ ಸ.ನಂ. 34/1

ರಲ್ಲಿ 1-36, 35/2 ರಲ್ಲಿ 0-16, 35/3 ರಲ್ಲಿ 0-16, 35/5 ರಲ್ಲಿ 0-31 ಹಾಗೂ 35/4 ರಲ್ಲಿ 1-39 ಒಟ್ಟು 7-20 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ವಿಜಯ ವಿಠಲ ಚಾರಿಟೆಬಲ್ ಮತ್ತು ಎಜ್ಯುಕೇಷನಲ್ ಟ್ರಸ್ಟ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 33/1 ರಲ್ಲಿ 1-02, 32 ರಲ್ಲಿ 1-00 ಹಾಗೂ ಚಿಕ್ಕಗುಬ್ಬಿ ಗ್ರಾಮದ ಸ.ನಂ. 34/1 ರಲ್ಲಿ 1-36, 35/2 ರಲ್ಲಿ 0-16, 35/3 ರಲ್ಲಿ 0-16, 35/5 ರಲ್ಲಿ 0-31 ಹಾಗೂ 35/4 ರಲ್ಲಿ 1-39 ಒಟ್ಟು 7-20 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: ಸಿಆರ್: 386/04-05 ದಿ: 15.4.2005 ರಲ್ಲಿ ಪ್ರಸ್ತಾಪಿತ ಗ್ರಾಮದ ದೊಡ್ಡಗುಬ್ಬಿ ಗ್ರಾಮದ ಸ.ನಂ. 33/1 ರಲ್ಲಿ 1-02, 32 ರಲ್ಲಿ 1-00 ಹಾಗೂ ಚಿಕ್ಕಗುಬ್ಬಿ ಗ್ರಾಮದ ಸ.ನಂ. 34/1 ರಲ್ಲಿ 1-36, 35/2 ರಲ್ಲಿ 0-16, 35/3 ರಲ್ಲಿ 0-16, 35/5 ರಲ್ಲಿ 0-31 ಹಾಗೂ 35/4 ರಲ್ಲಿ 1-39 ಒಟ್ಟು 7-20 ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109(i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಕೃಷ್ಣರಾಜಪುರ ಉಪ ನೋಂದಣಾ ಕಛೇರಿಯಲ್ಲಿ ದಿನಾಂಕ: 4.5.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i)(ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 33/1 ರಲ್ಲಿ 1-02, 32 ರಲ್ಲಿ 1-00 ಹಾಗೂ ಚಿಕ್ಕಗುಬ್ಬಿ ಗ್ರಾಮದ ಸ.ನಂ. 34/1 ರಲ್ಲಿ 1-36, 35/2 ರಲ್ಲಿ 0-16, 35/3 ರಲ್ಲಿ 0-16, 35/5 ರಲ್ಲಿ 0-31 ಹಾಗೂ 35/4 ರಲ್ಲಿ 1-39 ಒಟ್ಟು 7-20 ಎಕರೆ:ಗುಂಟೆ ಜಮೀನನ್ನು ಶ್ರೀ ವಿಜಯ ವಿಠಲ ಚಾರಿಟಬಲ್ ಮತ್ತು ಎಜ್ಯುಕೇಷನಲ್ ಟ್ರಸ್ಟ್ ದೊಡ್ಡಗುಬ್ಬಿ ಅಂಚೆ, ಹೆಣ್ಣೂರು ಬಾಗಲೂರು ರಸ್ತೆ, ಬೆಂಗಳೂರು-562 149 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಗೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i)(ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವೃಶಾಇ 47 ಶಾಸನ 2001 ಬೆಂಗಳೂರು ದಿ: 23.4.03 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಸದರಿ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ವಿಶೇಷ ಜಿಲ್ಲಾಧಿಕಾರಿಗಳು (ಕಂ)**
ಬೆಂಗಳೂರು ಜಿಲ್ಲೆ.

ಪಿ.ಆರ್. 972

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್: 66/03-04, ದಿನಾಂಕ: 15ನೇ ಜೂನ್ 2005**

**ವಿಷಯ:** ಮೆ: ಕೆ.ಎನ್. ಅನಂತಶಿವನ್ ಫೌಂಡೇಷನ್ ಫಾರ್ ಎಜ್ಯುಕೇಷನ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಹಾಡೋಸಿದ್ದಾಪುರ ಗ್ರಾಮದ ಸ.ನಂ. 24 ರಲ್ಲಿ 1-31 ಎ/ಗುಂ ಮತ್ತು ಚಿಕ್ಕ ನಾಯಕನಹಳ್ಳಿ ಗ್ರಾಮದ ಸ.ನಂ. 70 ರಲ್ಲಿ 0-09 ಗುಂಟೆ ಒಟ್ಟು 2-00 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯಿದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಕೆ.ಎನ್. ಅನಂತಶಿವನ್ ಫೌಂಡೇಷನ್ ಫಾರ್ ಎಜ್ಯುಕೇಷನ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಹಾಡೋಸಿದ್ದಾಪುರ ಗ್ರಾಮದ ಸ.ನಂ. 24 ರಲ್ಲಿ 1-31 ಎ/ಗುಂ ಮತ್ತು ಚಿಕ್ಕನಾಯಕನಹಳ್ಳಿ ಗ್ರಾಮದ ಸ.ನಂ. 70 ರಲ್ಲಿ 0-09 ಗುಂಟೆ ಒಟ್ಟು 2-00 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: (ಬಿ೯) ಸಿಆರ್: 148/04-05 ದಿ: 2.6.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 24 ಮತ್ತು 70 ರಲ್ಲಿ ಒಟ್ಟು 2-00 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109(i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಗಾಂಧೀನಗರ ಉಪ ನೋಂದಣಾ ಕಛೇರಿಯಲ್ಲಿ ದಿನಾಂಕ: 5.5.1995 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i)(ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ, ಹಾಡೋಸಿದ್ದಾಪುರ ಗ್ರಾಮದ ಸ.ನಂ. 24 ರಲ್ಲಿ 1-31 ಎ/ಗುಂ ಮತ್ತು ಚಿಕ್ಕನಾಯಕನಹಳ್ಳಿ ಗ್ರಾಮದ ಸ.ನಂ. 70 ರಲ್ಲಿ 0-09 ಗುಂಟೆ ಒಟ್ಟು 2-00 ಎ/ಗುಂ ಜಮೀನನ್ನು ಮೆ: ಕೆ.ಎನ್. ಅನಂತಶಿವನ್ ಫೌಂಡೇಷನ್ ಫಾರ್ ಎಜ್ಯುಕೇಶನ್ ಆಡಳಿತ ಕಛೇರಿ, ನಂ. 71, ಆರ್.ಬಿ.ಡಿ. ಲೇಔಟ್, ಸರ್ಜಾಪುರ ರಸ್ತೆ ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i)(ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿ: 23.4.03 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ವಿಶೇಷ ಜಿಲ್ಲಾಧಿಕಾರಿಗಳು (ಕಂ)**
ಬೆಂಗಳೂರು ಜಿಲ್ಲೆ.

ಪಿ.ಆರ್. 973

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಎಲ್.ಆರ್.ಎಫ್/ಸಿಆರ್: 21/05-06, ದಿನಾಂಕ: 24ನೇ ಜೂನ್ 2005**

**ವಿಷಯ:** ಮಾನಸ ಫೌಂಡೇಷನ್ (ರಿ) ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚಿಕ್ಕಗುಬ್ಬಿ ಮತ್ತು ನಾಡಗೌಡಗೊಲ್ಲಹಳ್ಳಿ ಗ್ರಾಮದ ಸ.ನಂ. 12/1, 12/2, 39/3 ಮತ್ತು 28/2 ರಲ್ಲಿ ಒಟ್ಟು 3-23 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯಿದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮಾನಸ ಫೌಂಡೇಷನ್ (ರಿ) ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚಿಕ್ಕಗುಬ್ಬಿ ಗ್ರಾಮದ ಸ.ನಂ. 12/1 ರಲ್ಲಿ 0-08, 12/2 ರಲ್ಲಿ 0-05, 39/3 ರಲ್ಲಿ 2-30 ಮತ್ತು ನಾಡಗೌಡಗೊಲ್ಲಹಳ್ಳಿ ಗ್ರಾಮದ ಸ.ನಂ. 28/2 ರಲ್ಲಿ 0-20 ಒಟ್ಟು 3-23 ಎ/ಗುಂ ಜಮೀನನ್ನು ಚಾರಿಟೆಬಲ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: ಸಿಆರ್: 92/05-06, ದಿನಾಂಕ: 9.6.2005 ರಲ್ಲಿ ಪ್ರಸ್ತಾಪಿತ ಚಿಕ್ಕಗುಬ್ಬಿ ಗ್ರಾಮದ ಸ.ನಂ. 12/1 ರಲ್ಲಿ 0-08, 12/2 ರಲ್ಲಿ 0-05,

39/3 ರಲ್ಲಿ 2-30 ಮತ್ತು ನಾಡಗೌಡಗೊಲ್ಲಹಳ್ಳಿ ಗ್ರಾಮದ ಸ.ನಂ. 28/3 ರಲ್ಲಿ 0-20 ಒಟ್ಟು 3-23 ಎ/ಗುಂ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಕೃಷ್ಣರಾಜಪುರ ಉಪ ನೋಂದಣಾ ಕಛೇರಿಯಲ್ಲಿ ದಿನಾಂಕ: 15.4.1998 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಚಾರಿಟೆಬಲ್ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i)(ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚಿಕ್ಕಗುಬ್ಬಿ ಗ್ರಾಮದ ಸ.ನಂ. 12/1 ರಲ್ಲಿ 0-08, 12/2 ರಲ್ಲಿ 0-05, 39/3 ರಲ್ಲಿ 2-30 ಮತ್ತು ನಾಡಗೌಡಗೊಲ್ಲಹಳ್ಳಿ ಗ್ರಾಮದ ಸ.ನಂ. 28/3 ರಲ್ಲಿ 0-20 ಒಟ್ಟು 3-23 ಎ/ಗುಂ ಜಮೀನನ್ನು ಮಾನಸ ಫೌಂಡೇಷನ್ (ರಿ) ತಪೋನಗರ, ಚಿಕ್ಕಗುಬ್ಬಿ, ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು ರವರಿಗೆ ಚಾರಿಟೆಬಲ್ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i)(ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿ: 23.4.03 ರಂತೆ ಚಾರಿಟೆಬಲ್ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ವಿಶೇಷ ಜಿಲ್ಲಾಧಿಕಾರಿಗಳು (ಕಂ)**
ಬೆಂಗಳೂರು ಜಿಲ್ಲೆ.

ಪಿ.ಆರ್. 974

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್: 18/05-06, ದಿನಾಂಕ: 8ನೇ ಜೂನ್ 2005**

**ವಿಷಯ:** ಶ್ರೀ ಸುರೇಶ್ ಕುಮಾರ್ ಶರ್ಮಾ ಮತ್ತು ಸುನೀಲ್ ಕುಮಾರ್ ಶರ್ಮಾ ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 23/2 ರಲ್ಲಿ 1-09 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯಿದೆ ಕಲಂ 109 ರಡಿ ಖರೀದಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ಸುರೇಶ್ ಕುಮಾರ್ ಶರ್ಮಾ ಮತ್ತು ಸುನೀಲ್ ಕುಮಾರ್ ಶರ್ಮಾ ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 23/2 ರಲ್ಲಿ 1-09 ಎಕರೆ:ಗುಂಟೆ ಜಮೀನನ್ನು ಪುಷ್ಪೋದ್ಯಮ ಮತ್ತು ತೋಟಗಾರಿಕೆ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: ಸಿಆರ್: 81/2005-06, ದಿನಾಂಕ: 4.6.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 23/2 ರಲ್ಲಿ 1-09 ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರರು ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಪುಷ್ಪೋದ್ಯಮ ಮತ್ತು ತೋಟಗಾರಿಕೆ ಉದ್ದೇಶಕ್ಕೆ 10 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i)(ii) ಮತ್ತು

